ಒಂದಾಣೆ ಮಾಲೆ 281

ಶ್ರೀ ಜಗನ್ನಾಥದಾಸ ವಿರಚಿತ

# ಶ್ರೀ ಹರಿಕಥಾಮೃತ ಸಾರ

(ತಾತ್ಪರ್ಯಸಹಿತ)

ಭಾಗ ೨



ಸಂಗ್ರಾಹಕ:

ಸಿ. ಗೋಪಾಲಕೃಷ್ಣ ಆಚಾರ್ಯ, ಚಿತ್ರಾಪುರ.



1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಎರಡು ಏಕಾಂಕ ನಾಟಕಗಳು.

## "ನಾವು ಸಾಹುಕಾರಕುಲದವರು"

(ಏಕಾಂಕ ಪ್ರಹಸನ—ದ್ವಿತೀಯ ಮುದ್ರಣ)

ರಚಯಿತ: **ಕುಡ್ಪಿ ವಾಸುದೇವ ಶೆಣೈ.**

ಬೆಲೆ: ಆಣೆ 4. ಟಪ್ಪಾಲು ಖರ್ಚು: 8 ನಯೆ ಪೈಸೆ.



## "ಮಹಾಶ್ವೇತಾ"

(ಪತ್ತೇದಾರಿ ಕಥಾವಸ್ತುವನ್ನೊಳಗೊಂಡ ನಾಟಕ)

ರಚಯಿತ: **ವೈದ್ಯಗುರು ಎಂ. ಆರ್. ಭಟ್.**

ಬೆಲೆ: ಆಣೆ 4. ಟಪ್ಪಾಲು ಖರ್ಚು: 8 ನಯೆ ಪೈಸೆ.

ಪರಿವೂರಿನವರು ಮೊಬಲಗನ್ನು ಅಂಚೆಚೀಟು ಮೂಲಕ ಕಳಿಸಬೇಕು.
ವಿ. ಪಿ. ಕಳಿಸಲಾಗುವುದಿಲ್ಲ.

ಪ್ರಭಾತ ಆಫೀಸು, ರಥಬೀದಿ, ಮಂಗಳೂರು.

ಶ್ರೀ ಜಗನ್ನಾಥದಾಸ ವಿರಚಿತ

# ಶ್ರೀ ಹರಿಕಥಾಮೃತ ಸಾರ

## (ಭಾಗ ೨)

---

### ಧ್ಯಾನಸಂಧಿ

ಹರಿಯೆ ಮುಖ್ಯ ನಿಯಾಮಕನು ಎಂ | ದರಿದು ಪುಣ್ಯಾಪುಣ್ಯ ಹರ್ಷಾ | ಮರ್ಷ ಲಾಭಾಲಾಭ ಸುಖದುಃಖಾದಿ ದ್ವಂದ್ವಗಳ || ನಿರುತ ಲವನಂಘ್ರಿಗೆ ಸಮರ್ಪಿಸಿ | ನರಕ ಭೂಸ್ವರ್ಗಾಪವರ್ಗದಿ | ಕರಣನಿಯ್ಯಾಮಕನ ಸರ್ವತ್ರದಲಿ ನೆನೆಯುತಿರು || ೧ ||

ತಾತ್ಪರ್ಯ: ಶ್ರೀಹರಿಯೇ ಸರ್ವಕ್ಕೂ ಮುಖ್ಯ ನಿಯಾಮಕನು. ಪಾಪ-ಪುಣ್ಯ, ಸುಖ-ದುಃಖ, ಲಾಭ-ನಷ್ಟ, ಈ ಎಲ್ಲಾ ಬಗೆಯು ಅವನಂಘ್ರಿಗೆ ಸಮರ್ಪಿಸಿ, ಅಸ್ವತಂತ್ರ ಜೀವಿಯು ಸರ್ವೇಂದ್ರಿಯಗಳಿಗೆ ನಿಯಾಮಕ ಹರಿಯನ್ನೇ ಬೇಡುತ್ತಿರು.

ಕಿಟ್ಟಗಟ್ಟಿದ ಲೋಹ ಪಾವಕ | ಸುಟ್ಟು ವಿಂಗಡಮಾಡುವಂತೆ ಘ | ರಟ್ಟು ವ್ರೀಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ || ವಿಠಲಾನೆಂದೊಮ್ಮೆ ಮೈಮರೆ | ದಟ್ಟಹಾಸದಿ ಕರೆಯೆ ದುರಿತಗ | ಳಟ್ಟುಳಿಯ ಬಿಡಿಸ್ಯವನ ತನ್ನೊಳಗಿಟ್ಟು ಸಲಹುವನು || ೨ ||

ತಾತ್ಪರ್ಯ: ಕಲ್ಮಷದಿಂದ ಕೂಡಿದ ಬಂಗಾರ, ಲೋಹಗಳನ್ನು ಅಗ್ನಿಯು ಸುಟ್ಟುಬಿಡುವಂತೆಯೂ, ಕಲ್ಲಿನ ಸಂಪರ್ಕ ಪೆಟ್ಟಿನಿಂದ ಬತ್ತದೊಳಗಿನ ಅಕ್ಕಿ ಬೇರೆಯಾಗುವಂತೆಯೂ, ಭಕ್ತರು ವಿಠಲನಾಮಸ್ಮರಣೆಯಿಂದ ದುರಿತ ಪಾಪದ ಉಪದ್ರದಿಂದ ಮುಕ್ತಿಹೊಂದುವರು.

ಆವಕ್ಷೇತ್ರಕೆ ಪೋದರೇನಿ | ನ್ನಾವ ತೀರ್ಥದಿ ಮುಳುಗಲೇನಿ | ನ್ನಾವ ಜಪತಪ ಹೋಮದಾನವ ಮಾಡಿ ಫಲವೇನು || ಶ್ರೀವರಜಗನ್ನಾಥ

ವಿಠಲನ । ಈ ವಿಧದಿ ಜಂಗಮಸ್ಥಾವರ । ಜೀವರೊಳು ಪರಿಪೂರ್ಣನೆಂದರಿ ಯದಿಹ ಮಾನವರು ॥ ೩ ॥

ತಾತ್ಪರ್ಯ: ಕಾಶಿ ಮೊದಲಾದ ಕ್ಷೇತ್ರಕ್ಕೆ ಹೋದಾಗ್ಯೂ, ಗಂಗಾ ಸ್ನಾನಗೈದರೂ, ಗಾಯತ್ರ್ಯಾದಿ ಜಪ, ದಾಕ್ಷಾಯಣ್ಯಾದಿ ಹೋಮಃಮಾಡಿ ದರೂ, ಅನ್ನದಾನಾದಿ ಸತ್ಕರ್ಮವೆಂದು ಮಾಡಿದರೂ, ಶ್ರೀಪತಿ ವಿಠಲ ಸ್ವಾಮಿಯು ಎಲ್ಲಾ ಜೀವರೊಳಃ ಪರಿಪೂರ್ಣನೆಂದು ತಿಳಿಯದಿರೆ ಎಲ್ಲವೂ ನಿರರ್ಥಕವೇ ಸರಿ.

## ನಾಮಸ್ಮರಣೆ ಸಂಧಿ

ಮಕ್ಕಳಾಡಿಸುವಾಗ ಮಡದಿಯೊಳಕ್ಕರದಿ ನಲಿವಾಗ ಹಯಪ । ಲ್ಲಕ್ಕಿಗಜ ಮೊದಲಾದ ವಾಹನವೇರಿ ಮೆರೆವಾಗ ॥ ಬಿಕ್ಕವಾಗಾಕಳಿಸುತಲಿ ದೇ । ವಕ್ಕಿ ತನಯನ ನೆನೆಯುತಿಹ ನರ । ಸಿಕ್ಕನೆಮದೂತರಿಗೆ ಆವಾವಲ್ಲಿ ನೋಡಿದರು ॥ ೪ ॥

ತಾತ್ಪರ್ಯ: ಮನೆಯಲ್ಲಿ ವಿನೋದವಾಗಿರುವಾಗಲೂ, ಮಕ್ಕಳನ್ನು ಕುಣಿಸುವಾಗಲೂ, ವಿಧವಿಧದ ವಾಹನವನ್ನೇರುವ ಸಮಯದಲ್ಲೂ ದೇವಕಿಕುಮಾರ ಕೃಷ್ಣನನ್ನು ನೆನೆದ, ಕರೆದ, ಜೀವಿಗಳು ಯಮದೂತರ ಪಾಶಕ್ಕೆ ಎಲ್ಲೆಲ್ಲೂ ಸಿಗುವಂತಿಲ್ಲ,

ಆವಕುಲದವನಾದೊಡೇನಿ । ನ್ನಾವ ದೇಶದೊಳಿದ್ದಡೇನಿ । ನ್ನಾವ ಕರ್ಮವಮಾಡಲೇನಿನ್ನಾವ ಕಾಲದಲಿ ॥ ಶ್ರೀವರನ ಸರ್ವತ್ರದಲಿ ಸಂ । ಭಾವಿಸುತ ಪೂಜಿಸುತ ಮೋದಿಪ । ಕೋವಿದರಿಗುಂಟೇನೋ ಭಯದುಃ ಖಾದಿ ದ್ವಂದ್ವಗಳು ॥ ೫ ॥

ತಾತ್ಪರ್ಯ: ಜಾತಿಭೇದವನ್ನರಿಯದೆ, ಯಾವ ದೇಶವೆನ್ನದೆ, ಕಾಲ ಕರ್ಮವನ್ನರಿಯದೆ, ಶ್ರೀವರ ನಾಮಸ್ಮರಣೆಗಳನ್ನು ಕೊಂಡಾಡುವರೋ ಅಂತಹ ಜ್ಞಾನಿಗಳಿಗೆ ದುಃಖಸುಖಗಳ ಭಯವಿದೆಯೆ?

ಕೆಂಡಕಾಣದೆ ಮುಟ್ಟಿದರು ಸರಿ । ಕಂಡು ಮುಟ್ಟಲು ದಹಿಸದಿಪ್ಪುದೆ। ಪುಂಡರೀಕದಳಾಯತಾಕ್ಷನ ವಿಮಲಪದಪದ್ಮ ॥ ಬಂಡುಣಿಗಳೆಂದೆನಿಪ

ಭಕ್ತರ । ಹಿಂಡು ನೋಡಿದ ಮಾತ್ರದಲಿ ತನು । ಹಿಂಡುಗೆಡಹಿದ ನರನ ಪಾವನಮಾಳ್ಪರಾಕ್ಷಣದಿ ॥ ೬ ॥

ತಾತ್ಪರ್ಯ: ಕೆಂಡವನ್ನು ಕಾಣದೆ ಮುಟ್ಟಿದರೂ ಕಂಡು ಮುಟ್ಟಿದರೂ ಸುಡುವಂತೆ ಕಮಲಾಯತನೇತ್ರನ ಪಾದವೆಂಬ ಕಮಲವನ್ನು ದುಂಬಿಗಳಂತಿರುವ ಭಕ್ತರು ಧ್ಯಾನಿಸಿದರೂ, ಪೂಜಿಸಿದರೂ ಅವರ ಪಾಪವನ್ನು ಕಳೆದು ಮಂಗಲಸುಖವನ್ನೇ ಕೊಡುವನು

ಕಲಿಮಲಾಪಹಳೆನಿಸುತಿಹ ಬಾಂ । ಬೊಳೆಯೊಳಗೆ ಸಂಚರಿಸಿ ಬದುಕುವ । ಜಲಚರಪ್ರಾಣಿಗಳು ಬಲ್ಲವೇ ತೀರ್ಥ ಮಹಿಮೆಯನು ॥ ಹಲವು ಬಗೆಯಲಿ ಹರಿಯ ಕರುಣಾ । ಬಲದಿ ಬಲ್ಲಿದರಾದ ಬ್ರಹ್ಮಾ । ನಿಲವಿಪೇಶಾದ್ಯಮರರರಿಯರನಂತನಮಲ ಗುಣ ॥ ೭ ॥

ತಾತ್ಪರ್ಯ: ಕಲಿಕಲ್ಮಷವನ್ನು ದೂರಗೊಳಿಪ ಭಾಗೀರಥೀನದಿಯೊಳಗೆ ಸಂಚರಿಸಿ; ಜೀವಿಸುವ ಪ್ರಾಣಿಗಳು ತೀರ್ಥಮಹಿಮೆಯನ್ನು ಹೇಗೆ ಅರಿಯಲು ಅಸಾಧ್ಯವೋ, ಅಂತೆಯೇ ಶ್ರೀಹರಿಯ ಕರುಣಾಬಲವನ್ನು ವಿಶೇಷವಾಗಿ ದೇವಾದಿದೇವತೆಗಳೂ ಅರಿತು ಕೊನೆಗಾಣರು.

ಜಲಗತೋಡುಪನಮಲಬಿಂಬವ । ಮೆಲುವೆನೆಂಬತಿ ಹರುಷದಿಂದಲಿ । ಜಲಚರಪ್ರಾಣಿಗಳು ನಿತ್ಯದಿ ಯತ್ನಗೈವಂತೆ ॥ ಹಲಧರಾನುಜ ಭೋಗ್ಯರಸಗಳ । ನೆಲೆಯನರಿಯದೆ ಪೂಜಿಸುತ ಹಂ । ಬಲಿಸುವರು ಪುರುಷಾರ್ಥಗಳ ಸತ್ಫಲಜರಾವೆಂದು ॥ ೯ ॥

ತಾತ್ಪರ್ಯ: ಸರೋವರದ ನೀರಿನಲ್ಲಿ ಪ್ರತಿಬಿಂಬಿಸುವ ಚಂದ್ರನ ಬಿಂಬವನ್ನು ಕಂಡು, ನೀರಿನಲ್ಲಿರುವ ಜಂತುಗಳು ತಿನ್ನುವ ವಸ್ತುವೆಂದು ಹರ್ಷಪಟ್ಟು ಕೊನೆಗೆ ಯತ್ನ ವಿಫಲವಾಗುವಂತೆ, ಬಲರಾಮನ ತಮ್ಮನಾದ ಕೃಷ್ಣನು ಎಲ್ಲಾ ರಸ, ಘನ ವಸ್ತುಗಳಲ್ಲಿ ಅಂಶರೂಪದಿಂದ ಮರೆಯಾಗಿರುವನೆಂಬುವುದನ್ನು ತಿಳಿಯದೆ ವೃಥಾ ಹಂಬಲಿಸುವರನೇಕರು ಭವದೊಳಗೆ. ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳ ಸೌಖ್ಯ ತಮ್ಮದೆಂದೇ ಎಣಿಸಿ ಕೊನೆಗೆ ವ್ಯರ್ಥಹೊಂದುವರು.

ಭೂತಳದಿ ಜನರುಗಳು ಮರ್ಮದ । ಮಾತುಗಳನಾಡಿದರೆ ಸಹಿಸದೆ । ಘಾತಿಸುವರತಿ ಕೋಪದಿಂದಲಿ ಎಚ್ಚರಿಸ ತೆರದಿ ॥ ಮಾತುಳಾಂತಕ

ಜಾರ ಹೇ ನವ । ನೀತಚೋರನೆ ಎನಲು ತನ್ನನಿ । ಕೇತನದೊಳಿಟ್ಟವರ ಸಂತೈಸುವನು ಕರುಣಾಳು ॥ ೧೦ ॥

ತಾತ್ಪರ್ಯ: ಭೂಮಿಯಲ್ಲಿ ಜನರುಗಳು ಒಬ್ಬರ ದುರ್ಗುಣದ ವಿಚಾರವಾಗಿ ಮರ್ಮವನ್ನು ಹಿಡಿದು ಮಾತಾಡಿದರೆ ಕೋಪಿಸಿ ಉರಿದು ಬೀಳುವರು. ಮಾವನ ಕೊಂದವನೇ, ಗೋಪಿ'ಜಾರನೇ, ಬೆಣ್ಣೆ ಕಳ್ಳನೇ, ಎಂದು ಹರಿಯನ್ನು ಕರೆದವರನ್ನು ಸ್ವಾಮಿಯು ರಕ್ಷಿಸಿ ಮುಕ್ತಿಯನ್ನು ಕರುಣಿಸುವನು ದಯಾಳು.

ಕೋಕನದ ಸಖನುದಯ ಘೂಕಾ । ಲೋಕನಕೆ ಸೊಗಸದಿರೆ ಭಾಸ್ಕರ । ತಾ ಕಳಂಕನೆ ಈ ಕೃತಿಪತಿ ಜಗನ್ನಾಥನಿರೆ ॥ ಸ್ವೀಕರಿಸಿ ಸುಖ ಪಲರಿಯದ ವಿ । ವೇಕಿಗಳು ನಿಂದಿಸಿದರೇನಹುದು । ಈ ಕವಿತ್ವವ ಕೇಳಿ ಮೋದಿಸದಿಹರೆ ಕೋವಿದರು ॥ ೧೧ ॥

ತಾತ್ಪರ್ಯ: ಸೂರ್ಯನು ಪ್ರಕಾಶಹೊಂದಲು ಗೂಬೆಯ ಕಣ್ಣಿಗೆ ಸೊಗಸದೆ ಹೋದರೆ ಸೂರ್ಯನು ಹೇಗೆ ದೋಷಿಯಲ್ಲವೋ, ಇಂತಹ ಸದ್ವಿಚಾರ ಶ್ರೇಷ್ಠತೆಯನ್ನು ನಿಂದಿಸಿದ ವಿವೇಕಿಗಳಿಂದ ಯಾವ ಮಾನ ಹಾನಿಯೂ ಹರಿಗಿಲ್ಲ.

ಜಾಲಿತೊಪ್ಪಲ ಅಜಾವಿಗಳು ಮೆ । ದ್ದಾಲ ಸುಧಿ ಸ್ವೇಚ್ಛಾನುಸಾರದಿ । ಪಾಲಗರೆವಂದದಲಿ ಲಕುಮೀರಮಣ ತನ್ನವರ ॥ ಕೀಳುಕರ್ಮವ ಸ್ವೀಕರಿಸಿ ತ । ನ್ನಾಲಯದೊಳಿಟ್ಟವರ ಪೊರೆವ ಕೃ । ಪಾಳು ಕಾಮದ ಕೈರವದಳ ಶ್ಯಾಮ ಶ್ರೀರಾಮ ॥ ೧೨ ॥

ತಾತ್ಪರ್ಯ: ಮೇಕೆಕುರಿಗಳು ಆಹಾರಪದಾರ್ಥವಾದ ಜಾಲಿಸೊಪ್ಪುಗಳನ್ನು ತಿಂದು ಮನೆಯಲ್ಲಿ ರಸವಾದ ಹಾಲನ್ನು ಕೊಡುವಂತೆ ಕೃಪಾಳುವಾದ ಶ್ರೀರಾಮನು ಭಕ್ತರ ಹೀನಕೃತ್ಯವನ್ನು ಮನ್ನಿಸಿ ಬೇಕಾದ ಸೌಭಾಗ್ಯವನ್ನು ಕೊಡುವನು. ಇದಕ್ಕೆ ಕಾಡಿನ ಶಬರಿಯೇ ಶ್ರೀರಾಮನ ಕರುಣೆಗೆ ಸಾಕ್ಷಿ

ದೀಪ ಕರದಲಿ ಪಿಡಿದು ಕಾಣದೆ । ಕೂಪದಲಿ ಬಿದ್ದಂತೆ ವೇದವ । ಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ ॥ ಶ್ರೀ ಪವನಮುಖ ವಿನುತ

ನವುಲ ಸು । ರೂಪಗಳ ವ್ಯಾಪಾರ ತಿಳಿಯದೆ । ಪಾಪಪುಣ್ಯಕೆ ಜೀವ ಕರ್ತೃ ವಕರ್ತೃ ಹರಿ ಎಂದು ॥ ೧೪ ॥

ತಾತ್ಪರ್ಯ: ವೇದೋಪನಿಷತ್ತುಗಳನ್ನು ತಿಳಿದ ಜ್ಞಾನಿಗಳು ಪಾಪ ಪುಣ್ಯಾದಿ ಎಲ್ಲಾ ಕರ್ತೃ ಕರ್ಮಗಳಿಗೆ ಜೀವನೇ ಮುಖ್ಯ ಕರ್ತೃವೆಂದೂ, ಹರಿಯು ಕರ್ತನಲ್ಲವೆಂದೂ ಅನ್ನುವರೋ ಅವರು ದೀಪವನ್ನು ಕೈಯಲ್ಲಿ ಹಿಡಿದು ಮುಂದುಗಡೆಯ ಬಾವಿಗೆ ಬಿದ್ದಂತೆ.

ಜನನಿ ಸೌಷ್ಟ ಪದಾರ್ಥಗಳ ಭೋಜನವಮಾಡಲು ಗರ್ಭಗತ ಶಿಶು । ದಿನದಿನದಲಭಿವೃದ್ಧಿಯೈದುವ ತೆರದಿ ಜೀವರಿಗೆ ॥ ವನಜನಾಭನು ಸರ್ವ ರಸ ಎಂ । ದುಣಿಸಿ ಸಂರಕ್ಷಿಸುವ ಜಾಹ್ನವಿ । ಜನಕ ಜನ್ಮಾದ್ಯಖಿಳ ದೋಷ ಸಿದೂರ ಗಂಭೀರ ॥ ೧೪ ॥

ತಾತ್ಪರ್ಯ: ಗರ್ಭವತಿ ತಾಯಿಯು ಒಳ್ಳೆ ಪದಾರ್ಥಗಳನ್ನು ಸೇವಿ ಸಲು ಗರ್ಭದಲ್ಲಿದ್ದ ಶಿಶುವು ಹೇಗೆ ಅಭಿವೃದ್ಧಿಯಾಗುವುದೋ ಅಂತೆಯೇ ಸರ್ವಮಯ ಗಂಗಾಪಿತ ಹರಿಯು ತಾನು ಸರ್ವರಸಗಳಲ್ಲೂ ತೃಪ್ತನಾಗಿ ಭಕ್ತರಿಗೆ ತೃಪ್ತಿಯೆನಿಸುವನು.

## ಸ್ವಾತಂತ್ರ್ಯದಾನ ಸಂಧಿ

ಏಣಲಾಂಛನನಮಲಕಿರಣ ಕ್ರ । ಮೇಣ ವೃದ್ಧಿಯನೈದಿ ಲೋಕರ । ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರನಂತೆ ॥ ವೈನತೇಯಾಂಸಗನ ಮೂರ್ತಿ । ಧ್ಯಾನವುಳ್ಳ ಮಹಾತ್ಮರಿಗೆ ಸು । ಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವ ಕೊಡುತಿಹವು ॥ ೧೫ ॥

ತಾತ್ಪರ್ಯ: ಚಂದ್ರನ ಸ್ವಚ್ಛವಾದ ಕಿರಣವು ಶುಕ್ಲಪಕ್ಷದಲ್ಲಿ ಕ್ರಮ ದಂತೆ ವೃದ್ಧಿಹೊಂದಿ ಕತ್ತಲೆಯನ್ನಪಹರಿಸುವಂತೆ ಗರುಡವಾಹನ ಹರಿಯು ಭಕ್ತರಿಗೆ ಜ್ಞಾನಭಕ್ತಿಗಳನ್ನು ಸ್ವಾತಂತ್ರ್ಯಧ್ಯಾನದಿಂದ ವೃದ್ಧಿಗೊಳಿಸಿ ಫಲ ವನ್ನು ಕೊಡುವನು.

ಸಲಿಲ ಬಿಂದು ಪಯೋಬ್ಧಿಯೊಳು ಬೀ । ಳಲು ವಿಕಾರವನೈದ ಬಲ್ಲದೆ । ಜಲವು ತದ್ರೂಪವನೆ ಐದುವದೆಲ್ಲ ಕಾಲದಲಿ ॥ ಕಲಿಮಲಾ

ಮಹನರ್ಚಿಸು ಮನ | ತ್ಸಕಲಜರ ಕುಕರ್ಮಗಳ ತಾವ್ನಿ | ಷ್ಕಲುಷ ಕರ್ಮ
ಗಳಾಗಿ ಪುರುಷಾರ್ಥಗಳ ಕೊಡುತಿಹವು || ೧೬ ||

ತಾತ್ಪರ್ಯ: ಕ್ಷೀರಸಮುದ್ರದಲ್ಲಿ ಬಿದ್ದ ಮಳೆನೀರು ಹಾಲಾಗುವಂತೆ, ಕಲ್ಮಷದೂರನಾದ ಹರಿಯನ್ನೂ ಅದೇ ಭಾವನೆಯಿಂದ ಅರ್ಚಿಸಲು ನಿಷ್ಕಲ್ಮಷ ಪದವಿತ್ತು ಸಲಹುವನು.

ತೋಟಿಗನು ಭೂಮಿಯೊಳು ಬೀಜವ | ನಾಟಬೇಕೆಂದೆನುತ ಹಿತ
ದಲಿ | ಮೋಟೆಯಿಂನೀರೆತ್ತಿ ಸಸಿಗಳ ಸಂತಯಿಸುವಂತೆ || ಪಾಟುಬಡದಲೆ
ಜಗದಿ ಜೀವರ | ಘೋಟಕಾಸ್ಯನು ಸೃಜಿಸಿ ಯೋಗ್ಯತೆ | ದಾಟಗೊಡದಲೆ
ಸಲಹುತಿಪ್ಪನು ಸರ್ವಕಾಲದಲಿ || ೧೭ ||

ತಾತ್ಪರ್ಯ: ತೋಟಿಗಾರನು ತನ್ನ ಭೂಮಿಯಲ್ಲಿ ಹಿತವನ್ನು ಬಯಸಿ, ಬೀಜ ಬಿತ್ತಿ, ಬಾವಿಯಿಂದ ನೀರೆತ್ತಿ, ಸಸಿಗಳನ್ನು ಸಂರಕ್ಷಿಸಿ, ಸಂತೋಷಪಡುವಂತೆ ಹಯವದನಮೂರುತಿಯು ಜಗತ್ತಿನಲ್ಲಿ ಜೀವರ ಸೃಷ್ಟಿಸ್ಥಿತಿಗಳನ್ನು ಮಾಡಿಸಿ ಹರುಷಿಸುವನು.

ವಂಶ ಬಾಗಲ ಬೆಲೆಯು ಕಂಡು ನ | ರಾಂಸದಲಿ ಶೋಭಿಪುದು
ಬಾಗದ | ವಂಶಪಾಶದಿ ಕಟ್ಟಿಯೇರುವ ಡೊಂಬ ಮಸ್ತಕಕೆ || ಕಂಸಮರ್ದನ
ದಾಸರಿಗೆ ನಿ | ಸ್ಸಂಶಯದಿ ವಂದಿಸದೆ ನಾವಿ | ದ್ವಾಂಸನೆಂದು ಅಹಂಕರಿಸೆ
ಭವಗುಣದಿ ಬಂಧಿಸುವ || ೧೮ ||

ತಾತ್ಪರ್ಯ: ಬಿದುರು ಬಾಗಿರಲು ಪಾಲಕಿ ಕೊಂಬಾಗಿ, ಮಾನವರು ಹೆಗಲಲ್ಲಿ ಹೊತ್ತುಕೊಂಡೊಯ್ಯುವರು. ಬಾಗದ ಬಿದುರುಗಳನ್ನು ಡೊಂಬರಾಟದವನು ಹಗ್ಗದಿಂದ ಕಟ್ಟಿ ತಾನೇ ಅದರ ಮಸ್ತಕಕ್ಕೆಏರುವನು. ಅಂತೆಯೇ ಕಂಸಾರಿಹರಿಯು ದೃಢಭಕ್ತಿಯಿಂದ ತನಗೆರಗದೆ ವಿದ್ವಾಂಸನೆನ್ನುವವನನ್ನು ಸಂಸಾರಪಾಶದಿಂದ ಬಿಗಿಯುವನು.

ಮದ್ಯಭಾಂಡವದೇವನದಿಯೊಳ | ಗದ್ದಿ ತೊಳೆಯಲು ನಿತ್ಯದಲಿ ಪರಿ |
ಶುದ್ಧವಾಹುದೆ ಎಂದಿಗಾದರು ಹರಿಪದಾಬ್ಜಗಳ || ಬುದ್ಧಿಪೂರ್ವಕ ಭಜಿಸ
ದವಗೆ ವಿ | ರುದ್ಧವೆನಿಸುವುದಿಲ್ಲ ಕರ್ಮಸ | ವೃದ್ಧಿಗಳು ದುಃಖವನೆ
ಕೊಡುತಿಹವಧಮಜೀವರಿಗೆ || ೧೯ ||

ತಾತ್ಪರ್ಯ: ಮದ್ಯದ ಪಾತ್ರವನ್ನು ಗಂಗಾನದಿಯಲ್ಲಿ ತೊಳಿದರೆ ಹೇಗೆ ಶುದ್ಧವೆನಿಸುವುದಿಲ್ಲವೊ ಹಾಗೆ ಶ್ರೀಹರಿಯು ಪಾದವನ್ನು ಮನಃಪೂರ್ವಕ ಭಜಿಸದವರಿಗೆ ಅವನ ಯಾವ ಸತ್ಕರ್ಮಗಳೂ ವಿರುದ್ಧಫಲವನ್ನೇ ಕೊಡುವುದು.

ಕ್ಷೋಣಿಪತಿಸುತನೆನಿಸಿ ಕೈದು । ಗ್ಧಾಣಿಗೊಡ್ಡುವ ತೆರದಿ ಸುಮನಸ। ಧೇನು ಮನೆಯೊಳಗಿರಲು ಗೋಮಯಬಯಸುವಂದದಲಿ ॥ ವೇಣುಗಾನ ಪ್ರಿಯ ನಹಿಸಕು । ಖಾನುಭವ ಬೇಡದೆಲೆ ಲಕುಮಿೞ । ಪ್ರಾಣನಾಥನ ಪಾದಭಕುತಿಯ ಕೊಂಡಾಡು ॥ ೨೦ ॥

ತಾತ್ಪರ್ಯ: ಧನಿಕನ ಕುಮಾರನು ದುಗ್ಧಾಣಿಗೋಸ್ಕರ ಬೇಡು ವಂತೆ, ಕಾಮಧೇನು ಮನೆಯಲ್ಲಿರಲು ಸೆಗಣಿ ತರಲು ಹೊರಟಂತೆ, ಮುರಲಿ ಮನೋಹರನನ್ನು ಬೇಡಿಕೊಳ್ಳದೆ ತೊಳಲಾಡುತ್ತಿರುವುದು ಮರಳು ತನವಷ್ಟೆ?

ಕ್ಷುಧೆಯಗೋಸುಗ ಪೋಗಿ ಕಾನನ । ಬದರಿಫಲಗಳಪೇಕ್ಷೆಯಿಂದಲಿ । ಪೊದೆಯೊಳಗೆ ಸಿಗಬಿದ್ದು ಬಾಯ್ದೆರೆದವನ ತೆರನಂತೆ ॥ ವಿಧಿಪಿತನ ಪೂಜಿಸದೆ ನಿನ್ನಯ । ಉದರಕೋಸುಗ ಸಾಧುಲಿಂಗ । ಪ್ರದರಿಶಿತರಾರಾಧಿಸುತ ಬಳಲದಿರು ಭವದೊಳಗೆ ॥ ೨೧ ॥

ತಾತ್ಪರ್ಯ: ಕ್ಷುಧೆಗೋಸುಗ ಹೋಗಿ ಕಾಡಿನ ಬೋರೆಹಣ್ಣಿಗೆ ವ್ಯೆಚಾಚಿ ಪೊದೆಯೊಳಗೆ ಸಿಕ್ಕಿ ಶ್ರಮಿಸುವಂತೆ, ಬ್ರಹ್ಮಜನಕನ ಶುದ್ಧವಾಗಿ ನೆನೆಯದೆ ಸಾಧುಗಳಂತೆ ಡಂಭಾಚಾರದ ಕೃತ್ರಿಮುಕರ್ಮಕ್ಕೆ ಅಯೋಗ್ಯವನ್ನು ಆಶ್ರಯಿಸಿ ಭವದಲ್ಲಿ ತೊಳಲಬಾರದು.

## (ಭಕ್ತಾಪರಾಧ) ಸಹಿಷ್ಣು ಸಂಧಿ

ಶ್ರೀಲಕುಮಿವಲ್ಲಭಗೆ ಸಮ ಕರು । ಣಾಳುಗಳ ನಾಕಾಣೆನೆಪ್ಪ ಕು । ಚೇಲನವಲಿಗೆ ಮೆಚ್ಚಿಕೊಟ್ಟನು ಸಕಲಸಂಪದವ ॥ ಕೇಳಿದಾಕ್ಷಣ ವಸ್ತ್ರಗಳ ಪಾಂ। ಚಾಲಿಗಿತ್ತನು ದೈತ್ಯನುದರವ । ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ॥ ೨೨ ॥

ತಾತ್ಪರ್ಯ: ಕುಚೇಲನೆಂಬವನ ಹಿಡಿ ಅವಲಕ್ಕಿಗೆ ಮೆಚ್ಚಿ ಸಕಲೈ ಶ್ವರ್ಯವನ್ನೂ ಕರುಣಿಸಿದನು. "ಕೃಷ್ಣ" ಎಂದು ಉಚ್ಚರಿಸಿದೊಡೆ

ಪಾಂಚಾಲಿಗೆ ಅಕ್ಷಯು ವಸನವಿತ್ತನು. ತನ್ನ ಭಕ್ತ ಪ್ರಹ್ಲಾದನ ರಕ್ಷಣೆಗಾಗಿ ಹಿರಣ್ಯಕಶಿಪುವನ್ನು ಕೊಂದ ಲಕ್ಷ್ಮೀಪತಿಗೆ ಸರಿಯಾದ ಕರುಣಾಮೂರ್ತಿಗಳಾರೂ ಇಲ್ಲ

ಪುತ್ರನೆನಿಸಿದ ಗೋಪಿದೇವಿಗೆ । ಭರ್ತೃವೆನಿಸಿದ ವ್ರಜದನಾರಿಯು । ರುತ್ರಲಾಲಿಸಿ ಪರ್ವತವ ನೆಗಹಿದ ಕೃಪಾಸಾಂದ್ರ ॥ ಶತ್ರುತಾಪನ ಯಜ್ಞ ಪುರುಷನ । ಪುತ್ರಿಯರ ತಂದಾಳತಿ ಜಗ । ಧಾತ್ರ ಮಂಗಳಗಾತ್ರ ಪರಮ ಪವಿತ್ರ ಸುರಮಿತ್ರ ॥ ೨೩ ॥

ತಾತ್ಪರ್ಯ: ದೇವಕಿಯು ಗರ್ಭಜನಾದರೂ ಗೋಪಿಯ ಮಗನಾದ, ಗೋಕುಲ ನಾರಿಯರ ಪತಿಯಾದ ಗೋಪಾಲಕರ ಮಿತ್ರನಾಗಿ ಗೋವರ್ಧನ ಬೆಟ್ಟವೆತ್ತಿ ಸಲಹಿದ, ಹದಿನಾರು ಸಾವಿರ ನಾರಿಯರನ್ನು ಬಲಾತ್ಕಾರದಿಂದ ಸೆರೆಯೊಳಗಿಟ್ಟ ಶತ್ರು ನರಕಾಸುರನನ್ನು ಕೊಂದ ಪರಮಪಾವನನು. ಶುಭಸ್ವರೂಪನು.

ಬಿಟ್ಟಿಗಳ ನೆವದಿಂದಲಾಗಲಿ । ಹೊಟ್ಟೆಗೋಸುಗವಾದಡಾಗಲಿ । ಕೆಟ್ಟರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ ॥ ನಿಟ್ಟುಸಿರಿನಿಂಬಾಯ್ದೆರೆದು ಹರಿ ! ವಿಠಲಾ ಸಲಹೆಂದೆನಲು ಕೈ । ಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕುತರನು ॥ ೨೪ ॥

ತಾತ್ಪರ್ಯ: ಸಂಕಟದಿಂದಾಗಲಿ, ಭಿಕ್ಷೆ ಎತ್ತುವಾಗಾಗಲಿ, ಕೆಟ್ಟ ರೋಗದಿಂದ ನರಳುತ್ತಿರುವಾಗಲಿ, ಹಾಸ್ಯಕ್ಕಾಗಲಿ, ಹರಿ, ವಿಠಲಾ ಎನ್ನುತ್ತ ನಿಟ್ಟುಸಿರೊಂದು ಬಿಡುವಷ್ಟರಲ್ಲಿ ಹರಿಯು ಕೈಗೊಟ್ಟು ಸಲಹುವನು. ಹಾಗೂ ಕೃಪಾಳು.

ಅಡವಿಯೊಳು ಬಿತ್ತದಲೆ ಬೆಳೆದಿಹ ! ಗಿಡದ ಮೂಲಿಕೆ ಸಕಲ ಜೀವರ । ಒಡಲೊಳಿಪ್ಪಾಮಯವ ಪರಿಹರಿಸೈಳುವಂದದಲಿ॥ಜಡಜಸಂಭವ ಜನಕ ತ್ರಿಜಗ । ದೊಡೆಯ ಸಂತೈಸೆನಲು ಅವರಿ । ದ್ದೆಡೆಗೆ ಬಂದೊದಗುವನು ಭಕ್ತರ ಭಿಡೆಯ ಮೀರದಲೆ ॥ ೨೫ ॥

ತಾತ್ಪರ್ಯ: ಯಾರಿಂದಲೂ ಬೀಜ ಬಿತ್ತಿ ಬೆಳೆಸದ ಕಾನನದಲ್ಲಿ ಬೆಳೆದ ವೃಕ್ಷಗಳಲ್ಲಿ ಗಿಡಮೂಲಿಕೆಗಳಾದ ಔಷಧಗಳು ಒಡಲೊಳಗಿಹ

ರೋಗಗಳನ್ನು ಪರಿಹರಿಸುವಂತೆ ಬ್ರಹ್ಮನ ತಂದೆಯಾದ ಹರಿಯು ಭಕ್ತರ ಮೊರೆಯನ್ನಾಲಿಸಿ ಅವರಿದ್ದೆಡೆಗೈದಿ ಸಂಕಟವನ್ನು ಪರಿಹರಿಸುವನು.

ಪ್ರಾಯವುದದಿಂದ ಜನರಿಗೆ । ನಾಯಕ ಪ್ರಭುಯೆಂಬಿ ಪೂರ್ವದಿ । ತಾಯ ಹೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಸುರಿಲೆ ॥ ಕಾಯ ನಿನ್ನದು ಬಿಟ್ಟು ಪೋಗಲು । ರಾಯ ನೀನೆಂಬುವ ಪ್ರಭುತ್ವ ಪ । ಲಾಯನವ ನೈದಿತು ಸಮೀಪದಲಿದ್ದರದ ತೋರು ॥ ೨೬ ॥

ತಾತ್ಪರ್ಯ: ಮಾನವನು ಪ್ರಾಯವುದದಿಂದಲೇ ಪ್ರಭುವೆಂದು ಮಮಕಾರದಿಂದ ವರ್ತಿಸುತ್ತಾನೆ. ಅದು ಕೇವಲ ಮೂಢತನವೆನಬೇಕು. ಕಾರಣ, ತಾಯಿಯ ಗರ್ಭದಲ್ಲಿ ಪಿಂಡವಾಗಿರುವ ಈ ಜೀವವನ್ನು ಮೃತನಾದ ಮೇಲೆ ದೇಹವನ್ನೂ ತ್ಯಜಿಸಿ ಕಾಣದೆಹೋಗುವ ಜೀವವನ್ನೂ ಪ್ರಭುಯೆಂದು ಯಾರು ಹೇಳುತ್ತಾರೆ? ಆದಿ ಮೊದಲಿಲ್ಲದ ಪ್ರಭುತ್ವ ಹೇಗೆ ಬಂತು?

ದೂರದಲ್ಲಿಹ ಪರ್ವತ ಘನಾ । ಕಾರ ತೋರ್ಪುದು ನೋಳ್ಪಜನರಿಗೆ । ಸಾರೆಗೈಯಲು ಸರ್ಪ ವ್ಯಾಘ್ರಗಳಿಂದ ಭಯವಿಹುದು ॥ ಘೋರತರ ಸಂಸಾರ ಸೌಖ್ಯಾ । ಸಾರತರವೆಂದರಿದು ನಿತ್ಯ । ಮಾರಮಣನಾರಾಧಿಸು ವರದರಿಂದ ಬಲ್ಲವರು ॥ ೨೭ ॥

ತಾತ್ಪರ್ಯ: ದೂರದ ಬೆಟ್ಟವು ಮೋಡದಂತೆ ನುಣುಪಾಗಿ ಕಣ್ಣಿಗೆ ತೋರುವುದು. ಸಮೀಪಿಸಿದರೆ ದುಷ್ಟಮೃಗಗಳಿಂದ ಬಾಧೆ ಹೇಗಿರುವುದೋ ಅಂತೆಯೇ ನೋಡುವವರಿಗೆ ಸಂಸಾರವೆಂಬುದು ಬಹು ಸುಲಭವೆಂದು ಕಂಡರೂ ಮಮಕಾರವೆಂಬ ಮಾಯಾಪಾಶದಿಂದ ಬಿಗಿದು ಅನುಭವಿಸಿದವರಿಗೆ ಗೊತ್ತು. ಬಲ್ಲವರು "ಪ್ರಭು" ಹರಿಯೆಂದೇ ಕೊಂಡಾಡುವರು.

ವ್ಯಾಧಿಯಿಂ ಪೀಡಿತ ಶಿಶುವಿಗೆ ಗು । ಡೋದಕವ ನೆರೆದದಕೆ ಔಷಧ । ತೇದು ಕುಡಿಸುವ ತಾಯಿಯೋಪಾದಿಯಲಿ ಸರ್ವಜ್ಞ ॥ ಬಾದರಾಯಣ ಭಕ್ತಜನಕೆ ಪ್ರ । ಸಾದರೂಪಕನಾಗಿ ಭಾಗವ । ತಾದಿಯಲಿ ಹೇಳಿದನು ಧರ್ಮಾದಿಗಳ ಫಲವೆಂದು ॥ ೨೮ ॥

ತಾತ್ಪರ್ಯ: ರೋಗಪೀಡಿತ ಮಗುವಿಗೆ ತಾಯಿಯು ಉಪಾಯದಿಂದ ಬೆಲ್ಲ ನೀರನ್ನು ಕುಡಿಸುತ್ತಾ ಜೊತೆಗೆ ಔಷಧವನ್ನೂ ಕುಡಿಸುವಳೋ, ಅಂ

ತೆಯೇ ವೇದವ್ಯಾಸ ಮುನಿಯು ಭಕ್ತರಿಗೆ ದೇವರ ಭಜನೆ, ನಾಮಸ್ಮರಣೆಯ ಮೂಲಕ ಧರ್ಮಾರ್ಥ ಮೋಕ್ಷಗಳೆಂದು ಸುಲಭೋಪಾಯವನ್ನು ತಿಳಿಸಿದ್ದಾರೆ.

ಭೂಮಿಯೊಳು ಜಲವಿತೃಷಾರ್ತನು । ತಾವರೆದು ಮೊಗವೆತ್ತಿ ಎಣ್ದೆಸೆ । ವ್ಯೋಮಮಂಡಲದೊಳಗೆ ಕಾಣದೆ ಮಿಡುಕುವಂದದಲಿ ॥ ಶ್ರೀಮನೋರಮ ಸರ್ವರಂತರ್ಯಾಮಿಯಾಗಿರೆ ತಿಳಿಯುದನುದಿನ । ಭ್ರಾಮಕರು ಭಜಿಸುವರು ಭಕುತಿಯುಲಸ್ಯದೇವತೆಯ ॥ ೨೯ ॥

ತಾತ್ಪರ್ಯ: ತೊರೆ ಭೂಮಿಯಲ್ಲಿ ನೀರು ಇರಲು ಬಾಯಾರಿ ಕಂಗೆಟ್ಟ ಓರ್ವನು ನೀರಿಗಾಗಿ ಆಕಾಶದ ಎಂಟು ದಿಕ್ಕುಗಳ ಮೋಡವನ್ನು ಹುಡುಕಿ ಭ್ರಮಿಸುವಂದದಲ್ಲಿ ಚಂಚಲ ಮನದವರು ಸುಲಭದ ಸ್ವಾಮಿಯನ್ನು ಸರ್ವರಲ್ಲೂ ವ್ಯಾಪ್ತನಾದಾಗ್ಯೂ ತಿಳಿಯದೆ ಅನ್ಯದೇವರನ್ನು ಭಜಿಸಲು ಮುಂದುವರಿಯುವುದೇ?

ತಿಮಿರ ತರಣಿಗಳೇಕ ದೇಶದಿ । ಸಮನಿಸಿಪ್ಪವೆ ಎಂದಿಗಾದರು । ಭ್ರಮಣ ಚಳಿಬಿಸಿಲಂಜಿಕೆಗಳುಂಟೇನೋ ಪರ್ವತಕೆ ॥ ಅಮಿತ ಜೀವರೊಳಿದ್ದು ಲಕುಮಿ । ರಮಣ ವ್ಯಾಪಾರಗಳ ಮಾಡುವ । ಕಮಲಪತ್ರ ಸರೋವರಗಳೊಳಗಿಪ್ಪ ತೆರನಂತೆ ॥ ೩೦ ॥

ತಾತ್ಪರ್ಯ: ಕತ್ತಲೆಯ ಅಂಜಿಕೆ ಸೂರ್ಯನಿಗೂ, ಚಳಿ-ಬಿಸಿಲುಗಳ ಸಂಚಾರಕ್ರಮ ಬೆಟ್ಟಕ್ಕೂ, ನೀರಿನ ಸಂಪರ್ಕ ತಾವರೆ ಎಲೆಗೂ ಹೇಗೆ ಇಲ್ಲವೋ ಹಾಗೆ. ಅನಂತಜೀವರೊಳಗೆ ಅಡಕವಾಗಿದ್ದ ಲಕ್ಷ್ಮೀಪತಿಗೆ ಎಲ್ಲಾ ವ್ಯಾಪಾರಗಳನ್ನೂ ಮಾಡಿಸುವನಾದರೂ ಇತರಾಪೇಕ್ಷೆಯೆಂಬುದಿಲ್ಲ.

ಕೀಟಪೇಶಸ್ಕಾರಿ ನೆನವಿಲಿ । ಕೀಟ ಭಾವವ ತೊರೆದು ತದ್ಯ । ತ್ಕೀಟರೂಪವನೈದಿ ಆಡುವ ತೆರದಿ ಭಕುತಿಯಲಿ ॥ ಕೈಟಭಾರಿಯ ಧ್ಯಾನದಿಂದ ಭ । ವಾಟವಿಯ ನತಿ ಶೀಘ್ರದಿಂದಲಿ । ದಾಟಿಸಾರೂಪ್ಯವನು ಐದುವರಲ್ಪ ಜೀವಿಗಳು ॥ ೩೧ ॥

ತಾತ್ಪರ್ಯ: ಅವರೆಹುಳವು ಕಣಜಹುಳುವಿನ ಆಹಾರ ಸಂಪರ್ಕಗಳಿಂದ ಕಣಜ ಹುಳುವಿನಂತೆ ರೆಕ್ಕೆ ಸಹಿತ ಹಾರಾಡುವಂತೆ ಆಗಿಬಿಡು

ವುದು ಅಂತೆಯೇ ಅಲ್ಪ ಜೀವಿಗಳಾದ ಮಾನವರು ಕೈಟಭನೆಂಬ ಅಸುರ ನನ್ನು ಕೊಂದ ಹರಿಯ ಭಕ್ತಿಧ್ಯಾನದಿಂದಲೂ ಸದಾ ಶಾಸ್ತ್ರ ಮನನದಿಂದ ಲೂ ಸಂಸಾರವೆಂಬ ಕಾಡನ್ನು ಬಿಟ್ಟು ಮೋಕ್ಷರೂಪವನ್ನು ಸೇರುವರು.

ಸರ್ವದೇಶವು ಪುಣ್ಯದೇಶವು । ಸರ್ವಕಾಲವು ಪರ್ವಕಾಲವು । ಸರ್ವ ಜೀವರು ದಾನಪಾತ್ರರು ಮೂರು ಲೋಕದಲಿ ॥ ಸರ್ವ ಮಾತುಗಳೆಲ್ಲ ಮಂತ್ರವು । ಸರ್ವ ಕೆಲಸಗಳೆಲ್ಲ ಪೂಜೆಯು ॥ ಶಿವವಂದ್ಯನ ವಿಮಲ ಮೂರ್ತಿ ಧ್ಯಾನವುಳ್ಳವಗೆ ॥ ೩೨ ॥

ತಾತ್ಪರ್ಯ: ಸುಂದರ ಸ್ವರೂಪಿ ಹರಿಯನ್ನು ಧ್ಯಾನಮಾಡುವ ಜ್ಞಾನಿ ಗಳಿಗೆ ಸರ್ವದೇಶವು ಪುಣ್ಯಕ್ಷೇತ್ರ, ಎಲ್ಲಾ ಕಾಲವೂ ಪುಣ್ಯ ಕಾಲ, ಸರ್ವ ಜೀವರೂ ತನ್ನಂತೆ ಇರುವರು. ಎಲ್ಲಾ ಮಾತುಗಳೂ ವೇದಮಂತ್ರವು, ಎಲ್ಲಾ ಕ್ರಿಯೆಗಳೂ ಹರಿಪ್ರೇರಣೆಯೆಂದು ಭಾವಿಸುವರು.

ಸೂಸಿಬಹ ನದಿಯೊಳಗೆ ತನ್ನ ಸ। ಹಾಸ ತೋರುವೆನೆಂದು ಜಲ ಕೆದ। ರಿಸಿದರೆ ಕೈಸೋತು ಮುಳುಗುವ ಹರಿಯ ಬಿಟ್ಟವನು ॥ ಕ್ಲೇಶವೈ ದುವನಾದಿಯಲಿ ಸ। ರ್ವೇಶಕಲ್ಪಿತ್ತಿಯ ಮಾಡಿದುದು ಬಿ॥ಟ್ಟಾಸೆಯಿಂದಲಿ ಅನ್ಯರಾರಾಧಿಸುವ ಮಾನವನು ॥ ೩೩ ॥

ತಾತ್ಪರ್ಯ: ತುಂಬಿ ತುಳುಕುತ್ತಾ ಪ್ರವಾಹದಿಂದ ಹರಿದಾಡುವ ನದಿ ಯಲ್ಲಿ ತನ್ನ ಪ್ರಯತ್ನದಿಂದ ಎದುರಾಗಿ ಈಜಾಡಿದರೆ ಕೈಸೋತು ಮುಳುಗುವ ವ್ಯಕ್ತಿಯಂತೆ, ಹರಿಯನ್ನು ಸ್ಮರಿಸದೆ, ಆಶೆಯಿಂದಲೋ ತನ್ನ ಯೋಗ್ಯತೆ ಯನ್ನು ಮೀರಿ ಇನ್ನೊಬ್ಬರಂತೆ ತಾನಾಗಬೇಕೆಂದೊ, ಇಹಪರಗಳಲ್ಲಿ ದುಃಖ ವನ್ನೇ ಹೊಂದುವರು.

ಲೋಕವಾರ್ತೆಯಿದಲ್ಲ ಪರಲೋ। ಕೈಕನಾಥನ ವಾರ್ತೆ ಕೇಳ್ವಡೆ। ಕಾಕುಮನುಜರಿಗಿದು ಸಮರ್ಪಕವಾಗಿ ಸೊಗಯಿಸದು ॥ ಕೋಕನದ ಪರಿ ಮಳವು ಷಟ್ಪದ ಸ್ವೀಕರಿಸುವಂದದಲಿ ಜಲಚರ। ಭೇಕಬಲ್ಲುದೆ ಇದರ ರಸ ಹರಿಭಕುತಗಲ್ಲದಲೆ ॥ ೩೪ ॥

ತಾತ್ಪರ್ಯ: ಸಾಮಾಜಿಕ ವಾರ್ತಾ ವಿಷಯಗಳು ಇದರೊಳಗಿಲ್ಲ. ಕೇವಲ ಪರಮಾತ್ಮನ ವಾರ್ತೆಯನ್ನು ಕೇಳುವವರಿಗೆ ಇದು ರಮ್ಯ. ಹೇಗೆಂ

ವರೆ ಕಮಲ ಪುಷ್ಪದ ಪರಿಮಳವನ್ನು ದುಂಬಿ ತಿಳಿಯಬಲ್ಲುದೇ ವಿನಹ ಸದಾ ನೀರಲ್ಲಿ ವಾಸಿಸುವ ಕಪ್ಪೆಗಳಿಗೆ ಸೊಗಸುವಂತಿದೆಯೇ?

ಕಬ್ಬಿನೊಳಗಿಹ ರಸವಿದಂತನಿ । ಗ್ವಬ್ಬಬಲ್ಲದೆ ಭಾಗ್ಯ ಯೌವನ । ಮಬ್ಬಿನಲಿ ಮೈಮರೆದವಗೆ ಹರಿ ಸುಚರಿತಾಮೃತವು ॥ ಲಭ್ಯವಾಗದು ಹರಿಪದಾಬ್ಜದಿ । ಹಬ್ಬಿದತಿ ಸದ್ಭಕ್ತಿರಸವುಂ । ಡುಬ್ಬಿ ಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ ॥ ೩೫ ॥

ತಾತ್ಪರ್ಯ: ಶ್ರೀಹರಿಯ ಚರಣಾಮೃತವು ಹರಿಪಾದಕಮಲದಲ್ಲಿ ಸದ್ಭಕ್ತಿರಸವುಳ್ಳವರಿಗೆ ಅತಿ ಸುಖದಾಯಕವೂ ಇಷ್ಟದಾಯಕವೂ ಆಗಿದೆ. ಹಲ್ಲು ಇಲ್ಲದವನಿಗೆ ಕಬ್ಬು ಹೇಗೆ ನೀರಸವಾಗಿ ಪರಿಣಮಿಸುವುದೋ, ಭಾಗ್ಯ ಯೌವನವೆಂಬ ಅಜ್ಞಾನಾಂಧಕಾರದಲ್ಲಿ ಮೈಮರೆತವಗೆ ಸೊಗಸಲಾರದು.

ಜಯಜಯತು ತ್ರಿಜಗದ್ವಿಲಕ್ಷಣ । ಜಯಜಯತು ಜಗದೇಕ ಕಾರಣ । ಜಯಜಯತು ಜಾನಕೀರಮಣನಿರ್ಗತಜರಾಮರಣ ॥ ಜಯಜಯತು ಜಾಹ್ನವೀಜನಕ ಜಯ । ಜಯತು ದೈತ್ಯಕುಲಾಂತಕಭವಾ । ಮಯಹರ ಜಗನ್ನಾಥ ವಿಠಲ ಪಾಹಿಮಾಂ ಸತತ ॥ ೩೬ ॥

ಶ್ರೀ ಹರಿಃ ಪ್ರೀಯತಾಂ.



# ಶ್ರೀ ಹರಿಕಥಾಮೃತಸಾರ

## (ಕಠಿಣ ಶಬ್ದಗಳ ಅರ್ಥ)

ಅನಲ = ಅಗ್ನಿ
ಅಲವ = ಸಂಪೂರ್ಣ
ಅಜಾವಿಗಳು = ಅಡುಗಳು
ಅಮಿತ = ಅನಂತ
ಆಮಯ = ರೋಗ
ಉಡುಪ = ಚಂದ್ರ
ಏಣಾಲಾಂಛನ = ಮೃಗದುಗುರುಳ್ಳ ಚಂದ್ರ
ಕಿಟ್ಟ = ಕಲ್ಮಷ
ಕೀಟ = ಅವರೇ ಹುಳ
ಕೈರವ = ಕಮಲ
ಕೋಕನದ = ಕಮಲ
ಕ್ಷುಧೆ = ಹಸಿವು
ಗುಡ+ಉದಕ = ಬೆಲ್ಲ+ನೀರು
ಗೋಮಯ = ಸೆಗಣಿ
ಘನ = ಮೋಡ
ಘೂಕ = ಗೂಬೆ
ಘೋಟಕಾಸ್ಯ = ಕುದುರೆ ಮುಖ
ಜಡಜ = ಕಮಲ
ಜಾಲಿ ತೊಪ್ಪಲ = ಜಾಲಿ ಸೊಪ್ಪು
ತಂಡುಲ = ಅಕ್ಕಿ
ತಿಮಿರ = ಕತ್ತಲೆ
ತೃಷಾರ್ತ = ಬಾಯಾರಿದವ
ತೋದು = ತೊಯಿಸಿ
ದಿವೌಕಸರು = ದೇವತೆಗಳು
ದ್ಯುನದಿ = ಆಕಾಶ ಗಂಗೆ
ದುಕೂಲ = ವಸ್ತ್ರ
ನಗ ಚಾಪ = ಪರ್ವತವೇ ಧನುಸ್ಸಾಗುಳ್ಳ ಈಶರ

ನಿವಹ = ಪ್ರವಾಹ
ನರಾಂಸ = ಮಾನವನ ಹೆಗಲು
ನಿಕೇತನ = ಮನೆ
ಪಾದಪ = ಮರ
ಪಾಟು = ಶ್ರಮ
ಪೇಶಸ್ಕಾರಿ = ಕಣಜಹುಳ
ಬಿಢೆ = ದಾಕ್ಷಿಣ್ಯ
ಬಂಡುಣಿ = ದುಂಬಿ
ಬಾಂದಳ = ಆಕಾಶ
ಬಾಂಬೊಳೆ = ಆಕಾಶಗಂಗೆ
ಭೇಕ = ಕಪ್ಪೆ
ಭೂರುಹ = ಮರ
ಭುಜಗ = ಸರ್ಪ
ವಾರಿದ = ಮೋಡ
ಮದ್ಯ = ಅಸುರೀ ದ್ರವ
ಮಾತುಳ = ಸೋದರಮಾವ
ಮೋಟೆ = ಬಾವಿ
ವಂಶ = ಬಿದಿರು
ವಾರಿಜಾಪ್ತ = ಸೂರ್ಯ
ವಿಪಿನ = ಕಾಡು
ವಿದಂತ = ಹಲ್ಲು ಇಲ್ಲದವ
ವ್ಯಾಘ್ರ = ಹುಲಿ
ವ್ರಜ = ನಂದಗೋಕುಲ
ವೈನತೇಯಾಂಸಗ = ಗರುಡನ ಹೆಗಲು
ಸಾರೂಪ್ಯ = ಮೋಕ್ಷ
ಸುಮನಸ = ದೇವತೆ
ಷಟ್ಪದ = ದುಂಬಿ
ಹೆದ್ದೈವ = ಹಿರಿದಾದ ದೇವ

Edited, Printed & Published by K. V. Shenoy
at The Prabhat Printers Ltd., Mangalore.